





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಪ್ರಕಾಶಮಯ ಹಗಲಿನಾಣೆ-

وَالضُّحٰى ۙ ①

2. ಮತ್ತು ರಾತ್ರಿಯಾಣೆ - ಅದು ಪ್ರಶಾಂತವಾಗಿ ಆವರಿಸುವಾಗ-

وَالَّيْلِ اِذَا سَجٰى ۙ ②

3. (ಸಂದೇಶವಾಹಕರೇ) ನಿಮ್ಮ ಪ್ರಭು ನಿಮ್ಮನ್ನು ಖಂಡಿತ ಕೈ ಬಿಡಲಿಲ್ಲ ಮತ್ತು ಅವನು ಕೋಪಿಸಲೂ ಇಲ್ಲ.

مَا وَدَّعَكَ رَبُّكَ وَمَا قَلٰى ؕ ③

4. ಮತ್ತು ಖಂಡಿತವಾಗಿಯೂ ಅನಂತರದ ಕಾಲಘಟ್ಟವು ನಿಮ್ಮ ಪಾಲಿಗೆ ಮುಂಚಿನ ಕಾಲಘಟ್ಟಕ್ಕಿಂತ ಉತ್ತಮವಾಗಿರುವುದು.

وَلَلْاٰخِرَةُ خَيْرٌ لَّكَ مِنَ الْاُوْلٰى ؕ ④

5. ಸದ್ಯದಲ್ಲೇ ನಿಮ್ಮ ಪ್ರಭು, ನೀವು ಸಂತುಷ್ಟರಾಗುವಷ್ಟನ್ನು ನಿಮಗೆ ಕೊಡುವನು.

وَلَسَوْفَ يُعْطِيْكَ رَبُّكَ فَتَرْضٰى ؕ ⑤

6. ಅವನು ನಿಮ್ಮನ್ನು ಅನಾಥನಾಗಿ ಕಂಡು ಆಶ್ರಯವನ್ನು ಒದಗಿಸಲಿಲ್ಲವೇ?

اَلَمْ يَجِدْكَ يَتِيْمًا فَاٰوٰى ۪ ⑥

7. ಮತ್ತು ನಿಮ್ಮನ್ನು ಸನ್ಮಾರ್ಗ ವರಿಯದವರಾಗಿ ಕಂಡು ಮಾರ್ಗದರ್ಶನ ಮಾಡಲಿಲ್ಲವೇ?

وَوَجَدَكَ ضَآلًّا فَهَدٰى ۪ ⑦

8. ನಿಮ್ಮನ್ನು ನಿರ್ಗತಿಕನಾಗಿ ಕಂಡು ಸ್ಥಿತಿವಂತನಾಗಿ ಮಾಡಲಿಲ್ಲವೇ?

وَوَجَدَكَ عَآئِلًا فَاَغْنٰى ؕ ⑧

9. ಆದುದರಿಂದ ಅನಾಥನ ಮೇಲೆ ಕಾಠಿಣ್ಯ ತೋರಬೇಡಿರಿ.

فَاَمَّا الْيَتِيْمَ فَلَا تَقْهَرْ ؕ ⑨

10. ಮತ್ತು ಯಾಚಕನನ್ನು ಜರೆಯಬೇಡಿರಿ.

وَاَمَّا السَّآئِلَ فَلَا تَنْهَرْ ؕ ⑩

11. ಮತ್ತು ನಿಮ್ಮ ಪ್ರಭುವಿನ ಅನುಗ್ರಹವನ್ನು ಪ್ರಕಟಪಡಿಸಿರಿ.

وَاَمَّا بِنِعْمَةِ رَبِّكَ فَحَدِّثْ ع ⑪ ع ۱۸